KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಡಿಸೆಂಬರ್ ೧೪, ೨೦೦೬ (ಮಾರ್ಗಶಿರ ೨೩, ಶಕ ವರ್ಷ ೧೯೨೮) | ಸಂಚಿಕೆ ೪೯ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

### ನಗರಾಭಿವೃದ್ಧಿ ಇಲಾಖೆ

**ಅಂತಿಮ ಅಧಿಸೂಚನೆ ಸಂಖ್ಯೆ: ನಅಇ 542 ಮೈಅಪ್ರಾ 2005, ಬೆಂಗಳೂರು, ದಿನಾಂಕ: 18ನೇ ನವೆಂಬರ್ 2006**

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರವು ಅಭಿವೃದ್ಧಿ ಯೋಜನೆಗಳಿಗಾಗಿ ಈ ಕೆಳಕಂಡ ಜಮೀನುಗಳನ್ನು ಭೂ ಸ್ವಾಧೀನಪಡಿಸಿಕೊಳ್ಳಲು ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಕಲಂ 17(1)ರ ಪ್ರಕಾರ ಪ್ರಾಥಮಿಕ ಅಧಿಸೂಚನೆಯನ್ನು ಅಧಿಸೂಚನೆ ಸಂಖ್ಯೆ ಎಸ್‌ಸಿಎಂ:1:2005-06, ದಿನಾಂಕ:31.5.05 ರಂದು ಹೊರಡಿಸಲಾಗಿತ್ತು.

ಈ ಯೋಜನೆಗಾಗಿ ಸರ್ಕಾರವು ಆದೇಶ ಸಂಖ್ಯೆ: ನಅಇ 542 ಮೈಅಪ್ರಾ 2005, ದಿನಾಂಕ: 1.9.06 ರಲ್ಲಿ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಕಾಯ್ದೆ, 1987ರ ಕಲಂ 18(3)ರ ಪ್ರಕಾರ ಸರ್ಕಾರದ ಮಂಜೂರಾತಿ ನೀಡಿದೆ. ಈ ಯೋಜನೆಯ ನಕಲನ್ನು ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ಕಛೇರಿಯಲ್ಲಿ ಪರಿಶೀಲನೆಗಾಗಿ ಇಡಲಾಗಿದೆ. ಈ ಯೋಜನೆಗೆ ಈ ಕೆಳಕಂಡ ಜಮೀನುಗಳು ಸಾರ್ವಜನಿಕ ಉದ್ದೇಶಕ್ಕೆ ಅಭಿವೃದ್ಧಿ ಯೋಜನೆಗಳಿಗಾಗಿ ಅವಶ್ಯಕವಾಗಿರುವುದು ಮನದಟ್ಟಾಗಿದೆ. ಆದ್ದರಿಂದ ಕರ್ನಾಟಕ ನಗರಾಭಿವೃದ್ಧಿ ಪ್ರಾಧಿಕಾರಗಳ ಅಧಿನಿಯಮ, 1987ರ ಕಲಂ 19(1) ಮತ್ತು (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಈ ಕೆಳಕಂಡ ಜಮೀನುಗಳನ್ನು ವಸತಿ ಯೋಜನೆ ನಿರ್ಮಾಣಕ್ಕಾಗಿ ಭೂ ಸ್ವಾಧೀನ ಪಡಿಸಿಕೊಳ್ಳಲು ತೀರ್ಮಾನಿಸಿದೆ.

ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರದ ವಿಶೇಷ ಭೂ ಸ್ವಾಧೀನಾಧಿಕಾರಿಯವರಿಗೆ ಈ ಜಮೀನುಗಳನ್ನು ಒಪ್ಪಂದದ ಮೇರೆಗೆ ವಾರ್ಡ್ ಮಾಡಿ ಭೂ ಸ್ವಾಧೀನಪಡಿಸಿಕೊಳ್ಳಲು ಭೂ ಸ್ವಾಧೀನ ಕಾಯ್ದೆ, 1894ರ ಕಲಂ 3(ಸಿ) ರನ್ವಯ ಅಧಿಕಾರ ನೀಡಲಾಗಿದೆ.

**ಅನುಸೂಚಿ**

**ಮಂಗಳೂರು ನಗರಾಭಿವೃದ್ಧಿ ಪ್ರಾಧಿಕಾರ ಭೂ ಸ್ವಾಧೀನ ಮಾಡಲಿರುವ ಜಮೀನಿನ ವಿವರಗಳು**

**ಜಿಲ್ಲೆ:** ದಕ್ಷಿಣ ಕನ್ನಡ **ತಾಲ್ಲೋಕು:** ಮಂಗಳೂರು **ಹೋಬಳಿ:** ಮಂಗಳೂರು ಎ **ಗ್ರಾಮ:** ಪದವು

| ಕ್ರ. ಸಂ. | ಸ.ನಂ. | ಖಾತಾದಾರರ/ ಅನುಭೋಗದಾರರು ಇತರ ಹಿತಾಸಕ್ತಿದಾರರು | ಕಿಸಂ | ಒಟ್ಟು ವಿಸ್ತೀರ್ಣ ಎ.ಸೆಂ. | ಚೆಕ್ಕುಬಂದಿ | | | | ಷರಾ |
|---|---|---|---|---|---|---|---|---|---|
| | | | | | ಉತ್ತರ | ದಕ್ಷಿಣ | ಪೂರ್ವ | ಪಶ್ಚಿಮ | |
| 1 | 2 | 3 | 4 | 5 | 6 | 7 | 8 | 9 | 10 |
| 1. | 71/1ಎ ಪೈಕಿ | 1. ಟಿ. ತಾರಾನಾಥ ಶೆಣೈ ಬಿನ್ ರಾಮಚಂದ್ರರಾವ್<br>2. ಎಂ. ವಿಠಲ ಭಟ್ ಬಿನ್ ಎಂ. ಅನಂತ ಭಟ್<br>3. ಪಿ. ಸರ್ವೋತ್ತಮ ಕಿಣಿ ಬಿನ್ ಕೊರಗ ಕಿಣಿ<br>4. ಶ್ರೀಮತಿ ಮೀನಾ ಆರ್. ಕಾಮತ್ ಕೋಂ ಎ. ರಾಮದಾಸ ಕಾಮತ್ | ಖುಷ್ಕಿ | 1-27 | 71/1ಬಿ | 70/5ಎ | 71/1ಎ | 71/1ಎ | ಖಾಲಿ ಸ್ಥಳ |

| 1 | 2 | 3 | 4 | 5 | 6 | 7 | 8 | 9 | 10 |
|---|---|---|---|---|---|---|---|---|---|
| | | 5. ದಿನಕರ ಪೈ ಬಿನ್ ಅಣ್ಣಪ್ಪ ಪೈ<br>6. ಎ. ರಾಮದಾಸ ಕಾಮತ್ ಬಿನ್ ಎ. ನಾರಾಯಣ ಕಾಮತ್<br>7. ಬಿ. ನರಸಿಂಹ ಪೈ ಬಿನ್ ಬಿ. ವೆಂಕಟೇಶ ಪೈ<br>8. ರಾಮಮೋಹನ ಶೆಣೈ ಬಿನ್ ಶ್ರೀನಿವಾಸ ಶೆಣೈ<br>9. ಕೆ. ಜಗನ್ನಾಥ ಪೈ ಬಿನ್ ಬಾಬುರಾಯ ಪೈ<br>10. ಪಿ. ವಾಸುದೇವ ಭಟ್ ಬಿನ್ ದಾಮೋದರ ಭಟ್<br>11. ಬಿ. ಬಾಲಕೃಷ್ಣ ಬಾಳಿಗ ಬಿನ್ ಬಿ. ರಾಮಚಂದ್ರ ಬಾಳಿಗ | | | | | | | |
| 2. | 118/3 | ಮುಂಡತ್ತಾಯ ದೈವ ಆಡಳಿತದಾರರು<br><br>1. ಲಕ್ಷ್ಮಣ ಆಳ್ವ<br>2. ಮಂಜಣ್ಣ ಶೆಟ್ಟಿ ಯಾನೆ ಮನೋಹರ ಶೆಟ್ಟಿ | ಖುಷ್ಕಿ | 1-38 | 118/2 | 119/2ಎ | 118/1 | 71/1ಬಿ | ಖಾಲಿ ಸ್ಥಳ |
| 3. | 119/2ಬಿ ಪೈಕಿ | 1. ರತ್ನಾ ಶೆಟ್ಟಿ<br>2. ಶಶಿಕಲಾ ಶೆಟ್ಟಿ<br>3. ಶೋಭಾ ಶೆಟ್ಟಿ<br>4. ಶಾಂತಿ ಶೆಟ್ಟಿ<br>5. ಚಂದ್ರಶೇಖರ ಶೆಟ್ಟಿ | ಖುಷ್ಕಿ | 0-35 | 119/2ಎ | 120/3ಎ | 119/2ಬಿ | 123/2ಬಿ | ಖಾಲಿ ಸ್ಥಳ |
| | | **ಒಟ್ಟು** | | **3.00** | | | | | |
| | | | (ಒಟ್ಟು ವಿಸ್ತೀರ್ಣ ಮೂರು ಎಕ್ರೆ ಮಾತ್ರ) | | | | | | |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 1674

**ಎನ್.ವೈ. ಸಾಗರ**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ

### ಪ್ರಕಟಣೆ

### ಹಿಂದುಳಿದ ವರ್ಗಗಳ ಅಭ್ಯರ್ಥಿಗಳ ಉನ್ನತ ಶಿಕ್ಷಣಕ್ಕೆ ಆರ್ಥಿಕ ನೆರವು

ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ವಿದೇಶಿ ವ್ಯಾಸಂಗಕ್ಕೆ ಆರ್ಥಿಕ ನೆರವು ನೀಡುವ ಕಾರ್ಯಕ್ರಮವನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖಾವತಿಯಿಂದ ಅನುಷ್ಠಾನಗೊಳಿಸಲಾಗುತ್ತಿದೆ. 2006-07ನೇ ಸಾಲಿಗೆ ವಿದೇಶಿ ವಿಶ್ವವಿದ್ಯಾನಿಲಯಗಳಲ್ಲಿ ಉನ್ನತ ವ್ಯಾಸಂಗಕ್ಕಾಗಿ ಆರ್ಥಿಕ ನೆರವು ಒದಗಿಸಲು ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತ ಪ್ರವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿ ದಿ:31.7.2006ರಲ್ಲಿ ಹೊರಡಿಸಲಾದ ಪ್ರಕಟಣೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ದಿ:21.8.2006ರ ಕೊನೆಯ ದಿನಾಂಕನ್ನು ಈ ಪ್ರಕಟಣೆಯ ಅನ್ವಯ ದಿ:11.12.2006ವರೆಗೂ ವಿಸ್ತರಿಸಲಾಗಿದೆ.

ಸ್ವಯಂ ಚಾಲಿತ ರೋಬೋ ತಾಂತ್ರಿಕತೆ, ಉತ್ಪಾದನಾ ತಂತ್ರಜ್ಞಾನ, ಲೇಜರ್ ತಂತ್ರಜ್ಞಾನ, ಕಾಗದ ತಂತ್ರಜ್ಞಾನ, ನಾವಿಕ ವಾಸ್ತುಶಿಲ್ಪ, ಗಣಕ ತಾಂತ್ರಿಕತೆ, ಮಾಹಿತಿ ತಂತ್ರಜ್ಞಾನ, ಬಹು ಮಾಧ್ಯಮ ಸಂವಹನ, ನೇತ್ರ ತಾಂತ್ರಿಕತೆ, ಕಲಾಪುನರ್ ಸ್ಥಾಪನಾ ತಾಂತ್ರಿಕತೆ, ಪಿಂಗಾಣಿ ಮತ್ತು ಗಾಜಿನ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಪೆಟ್ರೋಲಿಯಂ ತಂತ್ರಜ್ಞಾನ, ವೈಮಾನಿಕ ಅಥವಾ ಬಾಹ್ಯಾಕಾಶ ತಾಂತ್ರಿಕತೆ, ಇಂಧನ ಸಂಗ್ರಹಣಾ ತಾಂತ್ರಿಕತೆ, ಇಂಧನ ಸಂರಕ್ಷಣೆ, ಪರಮಾಣು ತಾಂತ್ರಿಕತೆ ಮುಂತಾದ ವಿಷಯಗಳಿಗೆ ಸಂಬಂಧಿಸಿದಂತೆ ವಿದೇಶಿ ವಿಶ್ವವಿದ್ಯಾಲಯಗಳಲ್ಲಿ ಪೋಸ್ಟ್ ಡಾಕ್ಟರಲ್ (ಪಿಎಚ್.ಡಿ) ಹಾಗೂ ಸ್ನಾತಕೋತ್ತರ ಪದವಿಯ ಉನ್ನತ ವ್ಯಾಸಂಗ ಮಾಡಲು ಇಚ್ಛಿಸುವ ಅರ್ಹ ಅಭ್ಯರ್ಥಿಗಳು ಅರ್ಜಿ ಸಲ್ಲಿಸಬಹುದು.

. **ಅರ್ಹತೆ:** 1. ಪದವಿ/ಸ್ನಾತಕೋತ್ತರ ಅಥವಾ ಡಾಕ್ಟರೇಟ್ ಪದವಿಯಲ್ಲಿ ಶೇ.60 ಅಂಕಗಳಿಸಿರಬೇಕು.

. 2. ವಯೋಮಿತಿ: ಅರ್ಜಿ ಸಲ್ಲಿಸಿದ ಕೋರ್ಸು ಪ್ರಾರಂಭವಾಗುವ ದಿನಾಂಕಕ್ಕೆ 35 ವರ್ಷ ಮೀರಿರಬಾರದು.

. 3. ಕುಟುಂಬದ ಮಾಸಿಕ ಆದಾಯ: ರೂ.12,000 ಒಳಗಿರಬೇಕು.

. 4. ಪ್ರಸ್ತುತ ಜಾರಿಯಲ್ಲಿರುವ ದಿ: 30.3.2002ರ ಸರ್ಕಾರಿ ಆದೇಶದನ್ವಯ ಅಭ್ಯರ್ಥಿಗಳು ಹಿಂದುಳಿದ ವರ್ಗಕ್ಕೆ ಸೇರಿದವರಾಗಿರಬೇಕು.

ಆರ್ಥಿಕ ನೆರವನ್ನು ಮೂರು ವರ್ಷಗಳ ಅವಧಿಗೆ, ವಾರ್ಷಿಕವಾಗಿ ಗರಿಷ್ಠ 3.50 ಲಕ್ಷ ರೂ.ನಂತೆ ಅಥವಾ ಇಡೀ ವ್ಯಾಸಂಗದ ಅವಧಿಗೆ ಗರಿಷ್ಠ 10.00 ಲಕ್ಷ ರೂ.ಒದಗಿಸಲಾಗುತ್ತದೆ.

ಅರ್ಹ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಸಂಬಂಧಪಟ್ಟ ಜಿಲ್ಲೆಗಳ ಜಿಲ್ಲಾ ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರ ಕಲ್ಯಾಣ ಅಧಿಕಾರಿಗಳ ಕಛೇರಿಯಿಂದ ಉಚಿತವಾಗಿ ಪಡೆಯಬಹುದಾಗಿದೆ. ಮತ್ತು ಕಾರ್ಯಕ್ರಮದ ನಿಯಮಗಳ ಮತ್ತು ಷರತ್ತುಗಳ ವಿವರಗಳನ್ನು ಸದರಿ ಕಛೇರಿಯ ಹಾಗೂ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರ ಕಛೇರಿಯಲ್ಲಿ, ಅಂದರೆ, ನಂ.14/3,ಸಿಎಫ್.ಸಿ.ಕಟ್ಟಡ, ನೃಪತುಂಗ ರಸ್ತೆ, ಬೆಂಗಳೂರು (ದೂರವಾಣಿ:22232105/22232215) ಇಲ್ಲಿನ ಪ್ರಕಟಣಾ ಫಲಕದಲ್ಲಿ ಗಮನಿಸಿ ತಿಳಿಯಬಹುದಾಗಿದೆ. ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲಾತಿಗಳೊಂದಿಗೆ ನಿರ್ದೇಶಕರು, ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ, ಬೆಂಗಳೂರು ಇವರಿಗೆ ದಿ:11.12.2006ರೊಳಗೆ ಸಲ್ಲಿಸಕ್ಕದ್ದು.

ನಿರ್ದೇಶಕರ ಪರವಾಗಿ,
ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ಬೆಂಗಳೂರು.

**Financial Assistance of Higher Education to Backward Classes Candidates.**

The Department of Backward Classes Welfare in implementing the scheme of providing financial assistance to Backward Classes and Minority candidates for persuing Higher education in Foreign Universities. Application were invited from eligible candidates belonging to Backward Classes and Minorities for providing financial assistance to pursue higher education in the universities of foreign countries for the year 2006-07. vide Notification dated:31.7.2006 and the last date fixed for receipt of filled in applications was 21.8.2006, which is now extended upto 11.12.2006 vide this Notification.

Candidates willing to pursue higher studies like post doctoral, Ph.D.&Master's degree in courses viz Automation Robotic including artificial intelligence, Macaronis and Manufaturing Technology, Laser Technology, Paper Technology, Naval Architecture, Information Technology including Computer Engineering, Multi-Media Communication, Optometry, Art Retoration Technology, Ceramic and Glass Technology, Bio-Tecnology, Petroleum Technology, Aircraft Technology / Space Engineering, Composite materials Engineering and Nuclear Engineering etc., in Foreign Universities are eligible to apply.

**Eligibility:**

1. The candidate must have secured 60% marks in Degree/Post Graduation/Ph.D.
2. The candidate must be within 35 years of age as on date of commencement of the course of studies applied for.
3. The monthly income of family of the candidate must be within Rs.12,000/-
4. The candidate must belong to either of the categories of the Backward Classes as per the existing Govt order dt:30/3/2002.

The financial assistance will be sanctioned for 3 years upto a maximum of Rs.3.50 lakhs per annum or a maximum of Rs.10.00 lakhs for the entire duration of the course.

The eligible candidates may obtain the prescribed application form, free of cost from the office of the concerned District officers, Backward Classes and minorities welfare of the district and also go through the rules and regulations of the scheme displayed in notice board and also in the Directorate of Backward Classes Welfare, Govt of Karnataka at No.14/3, CFC Building, Nrupathunga Road, Bangalore-560 001 (Telephone.No.22232105/22232215)

The duly filled in application form along with relevant documents should be submitted on or before 11.12.2006 to the Director Backward Classes Welfare Department, No.14/3, 3rd Floor, C.F.C. Building, Nrupathunga Road, Bangalore-560 001.

for Director,
P.R. 1675 Backward Classes Department Bangalore.

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಇವರ ನಡವಳಿಗಳು**

**ವಿಷಯ:** ಸಮಾಪನೆಗೊಂಡಿರುವ ಕುಂಚೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ: ಇದರ ನೊಂದಣಿ ರದ್ದತಿ ಬಗ್ಗೆ.

**ಉಲ್ಲೇಖ:**
1. ಈ ಕಚೇರಿಯ ಪತ್ರ ಸಂಖ್ಯೆ.ಡಿಆರ್‌ಎಸ್:ಕಾನೂನು-3:ಡಿಎಲ್‌ಎಸ್-5:02-03:ದಿನಾಂಕ: 6.9.2002 ಮತ್ತು 20.5.05.
2. ಸಮಾಪನಾಧಿಕಾರಿ, ಕುಂಚೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ:ಹಾಗೂ ಮಾರಾಟಾಧಿಕಾರಿ-2 ರವರ ಪತ್ರದ ದಿನಾಂಕ 16.9.2006.
3. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ, ಇವರ ಪ್ರಸ್ತಾವನೆ ನಂ. ಎಆರ್-24:ಸಮಾಪನೆ:ಸಿಆರ್-35:06-07:ದಿನಾಂಕ:27.9.2006.

**ಪ್ರಸ್ತಾವನೆ:**

ಕುಂಚೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ:ಕುಂಚೇನಹಳ್ಳಿ ಶಿವಮೊಗ್ಗ ತಾಲ್ಲೂಕ್, ಈ ಸಂಘವು ನೊಂದಣಿ ಸಂಖ್ಯೆ:ಎಆರ್-24: ನೊಂದಣಿ:ಆರ್‌ಜಿಎನ್:205:23257:98:ದಿನಾಂಕ:25.1.1999 ರಂತೆ ನೊಂದಣಿಯಾಗಿದೆ. ಸಂಘವು ತನ್ನ ನೊಂದಣಿ ಉದ್ದೇಶದನ್ವಯ ಸಮರ್ಪಕವಾಗಿ ಕಾರ್ಯನಿರ್ವಹಿಸದ ಉದ್ದೇಶಕ್ಕಾಗಿ ಉಲ್ಲೇಖ (1)ರ ಆದೇಶದನ್ವಯ ಸಂಘವನ್ನು ಸಮಾಪನೆಗೊಳಿಸಿ, ಮಾರ್ಗವಿಸ್ತರ್ಣಾಧಿಕಾರಿ, ಶಿಮೂಲೆ, ಇವರನ್ನು ನೇಮಕ ಮಾಡಲಾಗಿರುತ್ತದೆ. ಸದರಿಯವರು ನೊಂದಣಿ ರದ್ದತಿ ಕ್ರಮದಲ್ಲಿ ಸಹಕರಿಸುತ್ತಿಲ್ಲವೆಂಬ ಕಾರಣದಿಂದ, ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪವಿಭಾಗದ ಕಚೇರಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಮಾರಾಟಾಧಿಕಾರಿ-2 ಇವರನ್ನು ಸಮಾಪನಾಧಿಕಾರಿಯನ್ನಾಗಿ ಬದಲಾಯಿಸಿ ನೇಮಕ ಮಾಡಲಾಗಿರುತ್ತದೆ. ಆದರಂತೆ ಸದರಿಯವರು ದಿನಾಂಕ:25.6.2005 ರಂದು ಸಂಘದ ಪ್ರಭಾರವನ್ನು ವಹಿಸಿಕೊಂಡಿದ್ದಾರೆ.

ಸಹಾಯಕ ನಿಬಂಧಕರು, ಶಿವಮೊಗ್ಗರವರು ಉಲ್ಲೇಖ (3)ರಲ್ಲಿ ವರದಿ ಮಾಡಿರುವ ಪ್ರಕಾರ ದಿನಾಂಕ:12.7.2006 ರಂದು ಇಲಾಖಾಧಿಕಾರಿಗಳು ಹಾಗೂ ಶಿಮೂಲೆ ಅಧಿಕಾರಿಗಳು ಕುಂಚೇನಹಳ್ಳಿ ಗ್ರಾಮಕ್ಕೆ ಪ್ರಭಾರ ಪಡೆಯಲು ಭೇಟಿ ನೀಡಿದ್ದು, ಹಿಂದಿನ ಕಾರ್ಯದರ್ಶಿಯವರಿಂದ ಒಂದು ಚೀಲದಲ್ಲಿ ಕಟ್ಟಿದ್ದ ಲೆಕ್ಕಪತ್ರಗಳನ್ನು ಗ್ರಾಮಸ್ಥರ ಸಮಕ್ಷಮದಲ್ಲಿ ಮಹಜರ್ ಮಾಡಿ ಪ್ರಭಾರ ಪಡೆದಿರುತ್ತಾರೆ. ಸದರಿಯವರ ವರದಿ ಪ್ರಕಾರ ದಿನಾಂಕ:1.4.1999 ರಿಂದ ತಹಲ್‌ವರೆಗೆ ವ್ಯವಹಾರ ನಡೆಸಿದ ಲೆಕ್ಕಪತ್ರಗಳು ದೊರೆತಿರುವುದಿಲ್ಲ. ಇವುಗಳನ್ನು ದಿನಾಂಕ: 14.7.2006 ರೊಳಗೆ ಸಮಾಪನಾಧಿಕಾರಿಗೆ ಒಪ್ಪಿಸುವುದಾಗಿ ಒಂದು ವೇಳೆ ಸಿಗದಿದ್ದಲ್ಲಿ ಸಂಘದ ನೊಂದಣಿ ರದ್ದುಮಾಡಬಹುದಾಗಿದೆ ಎಂದು ಜಿಲ್ಲಾ ಗ್ರಾಮಸ್ಥರೂ ಒಪ್ಪಿ ಮಹರಿಗೆ ಸಹಿ ಮಾಡಿರುತ್ತಾರೆ. ಅದರಂತೆ ಗಡವು ನೀಡಿದ ದಿನಾಂಕ: 14.7.2006ರೊಳಗೆ ದಾಖಲಾತಿಗಳನ್ನು ಒದಗಿಸದೇ ಇರುವ ಪ್ರಯುಕ್ತ ಸಮಾಪನಾಧಿಕಾರಿಯವರು ಹಿಂದಿನ ಆಸ್ತಿ ಜವಾಬ್ದಾರಿಯ ತಃಖ್ತೆ ಆಧಾರದ ಮೇಲೆ ಸದಸ್ಯರಿಗೆ ಷೇರು ಕೊಡಲು ಷೇರುಬೆಲೆ ಶೂನ್ಯವಾದ ಕಾರಣ ಹೊಂದಾಣಿಕೆ ಮಾಡಿ ಬ್ಯಾಂಕಿನಲ್ಲಿರೂ ರೂ.1869-00 ಗಳನ್ನು ಪ್ರಭಾರಭತ್ಯೆಯೆಂದು ಖರ್ಚುಹಾಕಿ ಆಸ್ತಿ-ಜವಾಬ್ದಾರಿಗಳನ್ನು ಶೂನ್ಯಗೊಳಿಸಿ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಹಾಗೂ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗರವರು ಸಂಘದ ನೋಂದಣಿ ರದ್ದತಿಯನ್ನು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಶಿಫಾರಸ್ಸಿನನ್ವಯ ಸಂಘದ ಕಾರ್ಯವ್ಯಾಪ್ತಿಯು ತಾಲ್ಲೂಕ್ ಮಟ್ಟಕ್ಕಿಂತ ಕಡಿಮೆ ಇದ್ದು, ಆಸ್ತಿ-ಜವಾಬ್ದಾರಿ ತಃಖ್ತೆಯು ಶೂನ್ಯಗೊಂಡಿದ್ದು, ದಿನಾಂಕ: 15.9.2006 ರಂದು ಸಂಘದ ಸಮಾಪನಾಧಿಕಾರಿಯವರು ಅಂತಿಮ ಸಭೆ ನಡೆಸಿ ನೊಂದಣಿ ರದ್ದತಿಗೆ ಕೋರಿರುವ ಪ್ರಯುಕ್ತ, ಈ ಸಂಘದ ನೋಂದಣಿ ಸಂಖ್ಯೆಯನ್ನು ರದ್ದುಗೊಳಿಸುವುದು ಸೂಕ್ತವೆಂದು ಪರಿಗಣಿಸಿ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ**

**ಕ್ರ:ಸಂ:ಡಿಆರ್‌ಎಸ್:ಕಾನೂನು-3:ಡಿಎಲ್‌ಎಸ್:5:2002-03/2093, ದಿನಾಂಕ: 20ನೇ ನವೆಂಬರ್ 2006**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75 ಹಾಗೂ ಸರ್ಕಾರದ ಅಧಿಸೂಚನೆ ನಂ.ಸಿಎಂಡಬ್ಲ್ಯೂ:69:ಸಿಎಲ್‌ಎಂ:2001: ದಿನಾಂಕ:21.11.2001 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು ಸಮಾಪನಾವಸ್ಥೆಯಲ್ಲಿರುವ ಶಿವಮೊಗ್ಗ ತಾಲ್ಲೂಕ್, ಕುಂಚೇನಹಳ್ಳಿ ಹಾಲು ಉತ್ಪಾದಕರ ಸಹಕಾರ ಸಂಘ ನಿ:ಕುಂಚೇನಹಳ್ಳಿ, ಇದರ ನೋಂದಣಿ ಸಂ:ಎಆರ್-24:ನೋಂದಣಿ:ಆರ್‌ಜಿಎನ್:2005:23257:08:ದಿನಾಂಕ:25.1.1999 ಇದನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

ಈ ರದ್ದತಿಯ ಆದೇಶದ ದಿನಾಂಕದಿಂದ ಈ ಸಹಕಾರ ಸಂಘದ ಎಲ್ಲಾ ಕಾರ್ಯಚಟುವಟಿಕೆಗಳು ಸಂಪೂರ್ಣವಾಗಿ ನಿಂತುಹೋಗಿರುತ್ತದೆಂದು ಹಾಗೂ ಸಂಘವು ಅಸ್ತಿತ್ವದಲ್ಲಿಲ್ಲವೆಂದು ಪರಿಗಣಿಸತಕ್ಕದ್ದು.

ಈ ಸಂಘಕ್ಕೆ ಸಂಬಂಧಿಸಿದ ಎಲ್ಲಾ ಲಭ್ಯ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಶಿವಮೊಗ್ಗ ಉಪ-ವಿಭಾಗ, ಶಿವಮೊಗ್ಗ , ಇವರ ಕಾರ್ಯಾಲಯದಲ್ಲಿ ಕಾಯ್ದಿರಿಸತಕ್ಕದ್ದು.

ಈ ಆದೇಶವನ್ನು ಈ ದಿನ ದಿನಾಂಕ 20ನೇ ನವೆಂಬರ್ 2006 ರಂದು ನನ್ನ ಸ್ವಸಹಿ ಮತ್ತು ಕಚೇರಿಯ ಮೊಹರಿನೊಂದಿಗೆ ನೀಡಲಾಗಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 1676 ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು- ೫೬೦ ೦೦೧.

### ಪ್ರಕಟಣೆ

**ಪ್ರಕಟಣೆ ಸಂಖ್ಯೆಃಕರಾಆಃಆಡಳಿತಃ೦೬ಃ೨೦೦೬, ದಿನಾಂಕಃ ೧ನೇ ಡಿಸೆಂಬರ್ ೨೦೦೬**

ವಿಷಯಃ- ಗ್ರಾಹಕರ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ)ರಡಿಯಲ್ಲಿಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ದಿನಾಂಕ ೫-೫-೨೦೦೭ರ ಅಪರಾಹ್ನದಿಂದ ಜಾರಿಗೆ ಬರುವಂತೆ ಬೆಂಗಳೂರು ನಗರ ಮೂರನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿನ ಸದಸ್ಯರ ಹುದ್ದೆಯು ಖಾಲಿಯಾಗುವ ಹಿನ್ನೆಲೆಯಲ್ಲಿ, ಸದರಿ ವೇದಿಕೆಯ ಸದಸ್ಯರ ಸ್ಥಾನಕ್ಕೆ ಅರ್ಹ, ಯೋಗ್ಯ ಮತ್ತು ಸೂಕ್ತ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ ಇದರೊಡನೆ ಲಗತ್ತಿಸಿರುವ ನಿಗದಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ. ಈ ಮುಂದೆ ಓದಲಾಗುವ ಅರ್ಹತೆಯುಳ್ಳ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಯನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ ೩೧ನೇ ಜನವರಿ ೨೦೦೭ರ ಸಂಜೆ ೫-೦೦ ಗಂಟೆಯೊಳಗೆ ಬೆಂಗಳೂರು ನಗರ ಮೂರನೇ ಅಪರ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ನಂ.೮, ೬ನೇ ಮಹಡಿ, ಕನ್ನಿಂಗ್‌ಹ್ಯಾಂ ರಸ್ತೆ, ಬೆಂಗಳೂರು – ೫೬೦ ೦೫೨ ಇಲ್ಲಿಗೆ ಸಲ್ಲಿಸಬಹುದು.

ಅರ್ಹತೆಗಳುಃ-

೧) ಅರ್ಜಿದಾರರು ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ೩೫ ವರ್ಷಗಳ ವಯಸ್ಸನ್ನು ಮೀರಿರಬೇಕು ಹಾಗೂ ೬೦ ವರ್ಷ ವಯಸ್ಸನ್ನು ಮೀರಿರಬಾರದು.

೨) ಅರ್ಜಿದಾರರು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.

೩) ಗ್ರಾಹಕ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲು ದಕ್ಷರು, ಪ್ರಾಮಾಣಿಕರಾಗಿರುವುದರ ಜೊತೆಗೆ ಅರ್ಥಶಾಸ್ತ್ರ/ಕಾನೂನು/ ವಾಣಿಜ್ಯ/ಲೆಕ್ಕಪತ್ರ/ಕೈಗಾರಿಕೆ/ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ ೧೦ ವರ್ಷಗಳ ಅನುಭವವುಳ್ಳವರಾಗಿರಬೇಕು.

೪) ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆಗೊಂಡು ನೇಮಕಾತಿಯಾದವರು ಪ್ರತಿ ತಿಂಗಳು ರೂ. ೫೫೦೦-೦೦ ಗೌರವಧನ ಮತ್ತು ರೂ.೫೦೦-೦೦ಗಳ ಪ್ರಯಾಣ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

೫) ಜಿಲ್ಲಾ ವೇದಿಕೆಯ ಸದಸ್ಯರಾಗಿ ನೇಮಕಾತಿ ಹೊಂದಿದವರು ನ್ಯಾಯಿಕ ಸ್ವರೂಪದ ಕೆಲಸವನ್ನು ಮಾತ್ರ ನಿರ್ವಹಿಸಬೇಕಾಗಿರುತ್ತದೆ. ಜಿಲ್ಲಾ ವೇದಿಕೆಯ ಕಾರ್ಯನಿರ್ವಹಿಸುವ ಅವಧಿಯಲ್ಲಿ ಯಾವುದೇ ರಾಜಕೀಯ ಪಕ್ಷಗಳ ಅಥವಾ ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಗೆ ದಕ್ಕೆಯಾಗುವಂತಹ ಯಾವುದೇ ಕಾರ್ಯವನ್ನು ನಿರ್ವಹಿಸುತ್ತಿರಬಾರದು.

ನ್ಯಾಯಮೂರ್ತಿ ಚಂದ್ರಶೇಖರಯ್ಯ,
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
## ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು- ೫೬೦ ೦೦೧.

### ಪ್ರಕಟಣೆ

ಪ್ರಕಟಣೆ ಸಂಖ್ಯೆ:ಕರಾಆ:ಆಡಳಿತ:೦೬:೨೦೦೬, ದಿನಾಂಕ: **೨೭ನೇ ನವೆಂಬರ್ ೨೦೦೬**

ವಿಷಯ:- ಗ್ರಾಹಕರ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ)ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ದಿನಾಂಕ ೦೧-೦೫-೨೦೦೭ ಮತ್ತು ೧೩-೦೬-೨೦೦೭ರ ಅಪರಾಹ್ನದಿಂದ ಜಾರಿಗೆ ಬರುವಂತೆ ತುಮಕೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಮಹಿಳಾ ಸದಸ್ಯರ ಹಾಗೂ ಸದಸ್ಯರ ಹುದ್ದೆಗಳು ಖಾಲಿಯಾಗುವ ಹಿನ್ನೆಲೆಯಲ್ಲಿ, ಸದರಿ ವೇದಿಕೆಯ ಸದಸ್ಯರ ಸ್ಥಾನಕ್ಕೆ ಅರ್ಹ, ಯೋಗ್ಯ ಮತ್ತು ಸೂಕ್ತ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ ಇದರೊಡನೆ ಲಗತ್ತಿಸಿರುವ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ. ಈ ಮುಂದೆ ಓದಲಾಗುವ ಅರ್ಹತೆಯುಳ್ಳ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಯನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ ೩೧ನೇ ಜನವರಿ ೨೦೦೭ರ ಸಂಜೆ ೫-೦೦ ಗಂಟೆಯೊಳಗೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಹಳೇ ಡಿ.ಸಿ ಆಫೀಸ್ ಕಾಂಪೌಂಡ್, ತುಮಕೂರು – ೫೭೨ ೧೦೧ ಇಲ್ಲಿಗೆ ಸಲ್ಲಿಸಬಹುದು.

ಅರ್ಹತೆಗಳು:-

೧) ಅರ್ಜಿದಾರರು ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ೩೫ ವರ್ಷಗಳ ವಯಸ್ಸನ್ನು ಮೀರಿರಬೇಕು ಹಾಗೂ ೬೦ ವರ್ಷ ವಯಸ್ಸನ್ನು ಮೀರಿರಬಾರದು.

೨) ಅರ್ಜಿದಾರರು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.

೩) ಗ್ರಾಹಕ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲು ದಕ್ಷರು, ಪ್ರಾಮಾಣಿಕರಾಗಿರುವುದರ ಜೊತೆಗೆ ಅರ್ಥಶಾಸ್ತ್ರ/ಕಾನೂನು/ವಾಣಿಜ್ಯ/ಲೆಕ್ಕಪತ್ರ/ಕೈಗಾರಿಕೆ/ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ ೧೦ ವರ್ಷಗಳ ಅನುಭವವುಳ್ಳವರಾಗಿರಬೇಕು.

೪) ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆಗೊಂಡು ನೇಮಕಾತಿಯಾದವರು ಪ್ರತಿ ತಿಂಗಳು ರೂ.೫೫೦೦-೦೦ ಗೌರವಧನ ಮತ್ತು ರೂ.೫೦೦-೦೦ಗಳ ಪ್ರಯಾಣ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.

೫) ಜಿಲ್ಲಾ ವೇದಿಕೆಯ ಸದಸ್ಯರಾಗಿ ನೇಮಕಾತಿ ಹೊಂದಿದವರು ನ್ಯಾಯಿಕ ಸ್ವರೂಪದ ಕೆಲಸವನ್ನು ಮಾತ್ರ ನಿರ್ವಹಿಸಬೇಕಾಗಿರುತ್ತದೆ. ಜಿಲ್ಲಾ ವೇದಿಕೆಯ ಕಾರ್ಯನಿರ್ವಹಿಸುವ ಅವಧಿಯಲ್ಲಿ ಯಾವುದೇ ರಾಜಕೀಯ ಪಕ್ಷಗಳ ಅಥವಾ ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಗೆ ದಕ್ಕೆಯಾಗುವಂತಹ ಯಾವುದೇ ಕಾರ್ಯವನ್ನು ನಿರ್ವಹಿಸುತ್ತಿರಬಾರದು.

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ)ರಡಿಯಲ್ಲಿ ಜಿಲ್ಲಾ ವೇದಿಕೆಯ ಇಬ್ಬರು ಸದಸ್ಯರ ಪೈಕಿ ಒಬ್ಬರು ಸದಸ್ಯರು ಕಡ್ಡಾಯವಾಗಿ ಮಹಿಳೆಯರಾಗಿರುತ್ತಾರೆ. ಹೀಗಾಗಿ ಮಹಿಳಾ ಅಭ್ಯರ್ಥಿಗಳು ಜಿಲ್ಲಾ ವೇದಿಕೆಯ ಸದಸ್ಯರ ಸ್ಥಾನಕ್ಕೆ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.

ನ್ಯಾಯಮೂರ್ತಿ ಚಂದ್ರಶೇಖರಯ್ಯ,
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
## ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು- ೫೬೦ ೦೦೧.

### ಪ್ರಕಟಣೆ

ಪ್ರಕಟಣೆ ಸಂಖ್ಯೆ:ಕರಾಆ:ಆಡಳಿತ:೦೬:೨೦೦೬ ದಿನಾಂಕ: **೨೭ನೇ ನವೆಂಬರ್ ೨೦೦೬**

ವಿಷಯ:- ಗ್ರಾಹಕರ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ)ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ಉಲ್ಲೇಖ:- (೧) ರಾಜ್ಯ ಆಯೋಗದ ಸಮಸಂಖ್ಯೆಯ ಪ್ರಕಟಣೆ ದಿ. ೭-೧೦-೨೦೦೬.
(೨) ಮೈಸೂರು ಜಿಲ್ಲಾ ವೇದಿಕೆಯ ಪತ್ರ ಸಂಖ್ಯೆ:ಸಿಬ್ಬಂದಿ:ಸಿಆರ್:೧೮:೨೦೦೬-೦೭ ದಿನಾಂಕ ೧೩.೧೧.೨೦೦೬.

ಮೈಸೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ(ಮಹಿಳಾ) ಸ್ಥಾನಕ್ಕೆ ಸೂಕ್ತ ಅಭ್ಯರ್ಥಿಯನ್ನು ಆಯ್ಕೆ ಮಾಡುವ ಸಲುವಾಗಿ ಮೇಲೆ ಕ್ರಮ ಸಂಖ್ಯೆ (೧)ರಲ್ಲಿ ಓದಲಾಗುವ ಪ್ರಕಟಣೆ ಮೂಲಕ ಅರ್ಜಿಯನ್ನು ಆಹ್ವಾನಿಸಿದ್ದು, ಕ್ರಮ ಸಂಖ್ಯೆ (೨)ರ ಪತ್ರದ ಮೂಲಕ ಒಬ್ಬರು ಅಭ್ಯರ್ಥಿಯಿಂದ ಅರ್ಜಿಯು ಸ್ವೀಕೃತವಾಗಿದ್ದು, ಸದರಿ ಅರ್ಜಿಯು ನಿಗಧಿತ ನಮೂನೆಯಲ್ಲಿ ಇಲ್ಲದೇ ಇರುವುದರಿಂದ, ಸಂಬಂಧಪಟ್ಟ ಅರ್ಜಿಯನ್ನು ಆಯ್ಕೆಗೆ ಪರಿಗಣಿಸದೇ ಕಡತಗೊಳಿಸಲಾಗಿದೆ. ಮೈಸೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ(ಮಹಿಳಾ) ಸ್ಥಾನಕ್ಕೆ ಸೂಕ್ತ ಅಭ್ಯರ್ಥಿಯನ್ನು ಆಯ್ಕೆ ಮಾಡುವ ಸಲುವಾಗಿ ಈ ಮೂಲಕ ಹೊಸದಾಗಿ ಪ್ರಕಟಣೆಯನ್ನು ಹೊರಡಿಸಲಾಗಿದೆ.

ಮೈಸೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ(ಮಹಿಳಾ) ಸ್ಥಾನಕ್ಕೆ ಆಯ್ಕೆಯಾಗಲು ಈ ಮುಂದೆ ಓದಲಾಗುವ ಅರ್ಹತೆಯುಳ್ಳ ಅಭ್ಯರ್ಥಿಗಳು ಇದರೊಡನೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಗಳನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ ೩೧ನೇ ಜನವರಿ ೨೦೦೭ರ ಸಂಜೆ ೫-೦೦ ಗಂಟೆಯೊಳಗೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ನಂ.೮೪೫, ನ್ಯೂ ಕಾಂತರಾಜ ಅರಸು ರಸ್ತೆ, ಜಿ.ಸಿ.ಎಸ್.ಟಿ ಲೇಔಟ್, ಕುವೆಂಪು ನಗರ, ಮೈಸೂರು – ೫೭೦ ೦೨೩ ಇಲ್ಲಿಗೆ ಸಲ್ಲಿಸುವುದು.

ಅರ್ಹತೆಗಳು:-

೧) ಅರ್ಜಿದಾರರು ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ೩೫ ವರ್ಷಗಳ ವಯಸ್ಸನ್ನು ಮೀರಿರಬೇಕು ಹಾಗೂ ೬೦ ವರ್ಷ ವಯಸ್ಸನ್ನು ಮೀರಿರಬಾರದು.
೨) ಅರ್ಜಿದಾರರು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.
೩) ಗ್ರಾಹಕ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲು ದಕ್ಷರು, ಪ್ರಾಮಾಣಿಕರಾಗಿರುವುದರ ಜೊತೆಗೆ ಅರ್ಥಶಾಸ್ತ್ರ/ಕಾನೂನು/ವಾಣಿಜ್ಯ/ಲೆಕ್ಕಪತ್ರ/ಕೈಗಾರಿಕೆ/ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ ೧೦ ವರ್ಷಗಳ ಅನುಭವವುಳ್ಳವರಾಗಿರಬೇಕು.
೪) ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆಗೊಂಡು ನೇಮಕಾತಿಯಾದವರು ಪ್ರತಿ ತಿಂಗಳು ರೂ.೫೫೦೦-೦೦ ಗೌರವಧನ ಮತ್ತು ರೂ.೫೦೦-೦೦ಗಳ ಪ್ರಯಾಣ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
೫) ಜಿಲ್ಲಾ ವೇದಿಕೆಯ ಸದಸ್ಯರಾಗಿ ನೇಮಕಾತಿ ಹೊಂದಿದವರು ನ್ಯಾಯಿಕ ಸ್ವರೂಪದ ಕೆಲಸವನ್ನು ಮಾತ್ರ ನಿರ್ವಹಿಸಬೇಕಾಗಿರುತ್ತದೆ. ಜಿಲ್ಲಾ ವೇದಿಕೆಯ ಕಾರ್ಯನಿರ್ವಹಿಸುವ ಅವಧಿಯಲ್ಲಿ ಯಾವುದೇ ರಾಜಕೀಯ ಪಕ್ಷಗಳ ಅಥವಾ ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಗೆ ದಕ್ಕೆಯಾಗುವಂತಹ ಯಾವುದೇ ಕಾರ್ಯವನ್ನು ನಿರ್ವಹಿಸುತ್ತಿರಬಾರದು.

ನ್ಯಾಯಮೂರ್ತಿ ಚಂದ್ರಶೇಖರಯ್ಯ,
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ಆಯೋಗ,
ಬೆಂಗಳೂರು.

## ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
## ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು- ೫೬೦ ೦೦೧.

### ಪ್ರಕಟಣೆ

ಪ್ರಕಟಣೆ ಸಂಖ್ಯೆ:ಕರಾಆ:ಆಡಳಿತ:೦೬:೨೦೦೬, ದಿನಾಂಕ: ೨೭ನೇ ನವೆಂಬರ್ ೨೦೦೬

ವಿಷಯ:- ಗ್ರಾಹಕರ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ)ರಡಿಯಲ್ಲಿ ಜಿಲ್ಲಾ ವೇದಿಕೆಯ ಸದಸ್ಯರ ಆಯ್ಕೆ ಬಗ್ಗೆ.

ದಿನಾಂಕ ೦೨-೦೫-೨೦೦೭ರ ಅಪರಾಹ್ನದಿಂದ ಜಾರಿಗೆ ಬರುವಂತೆ ರಾಯಚೂರು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿನ ಎರಡೂ ಸದಸ್ಯರ ಹುದ್ದೆಗಳು ಖಾಲಿಯಾಗುವ ಹಿನ್ನೆಲೆಯಲ್ಲಿ, ಸದರಿ ವೇದಿಕೆಯ ಸದಸ್ಯರ ಸ್ಥಾನಕ್ಕೆ ಅರ್ಹ, ಯೋಗ್ಯ ಮತ್ತು ಸೂಕ್ತ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಸಲುವಾಗಿ ಇದರೊಡನೆ ಲಗತ್ತಿಸಿರುವ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ. ಈ ಮುಂದೆ ಓದಲಾಗುವ ಅರ್ಹತೆಯುಳ್ಳ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿದ ಅರ್ಜಿಯನ್ನು ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳೊಂದಿಗೆ ದಿನಾಂಕ ೩೧ನೇ ಜನವರಿ ೨೦೦೭ರ ಸಂಜೆ ೫-೦೦ ಗಂಟೆಯೊಳಗೆ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆ, ಡಿ.ಸಿ ಆಫೀಸ್ ಕಾಂಪೌಂಡ್, ರಾಯಚೂರು – ೫೮೪ ೧೦೧ ಇಲ್ಲಿಗೆ ಸಲ್ಲಿಸಬಹುದು.

ಅರ್ಹತೆಗಳು:-

1. ಅರ್ಜಿದಾರರು ಅರ್ಜಿಯನ್ನು ಸಲ್ಲಿಸುವ ದಿನಾಂಕದಂದಿಗೆ ೩೫ ವರ್ಷಗಳ ವಯಸ್ಸನ್ನು ಮೀರಿರಬೇಕು ಹಾಗೂ ೬೦ ವರ್ಷ ವಯಸ್ಸನ್ನು ಮೀರಿರಬಾರದು.
2. ಅರ್ಜಿದಾರರು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾನಿಲಯದ ಪದವೀಧರರಾಗಿರಬೇಕು.
3. ಗ್ರಾಹಕ ವ್ಯಾಜ್ಯಗಳನ್ನು ಇತ್ಯರ್ಥಪಡಿಸಲು ದಕ್ಷರು, ಪ್ರಾಮಾಣಿಕರಾಗಿರುವುದರ ಜೊತೆಗೆ ಅರ್ಥಶಾಸ್ತ್ರ/ಕಾನೂನು/ವಾಣಿಜ್ಯ/ಲೆಕ್ಕಪತ್ರ/ಕೈಗಾರಿಕೆ/ಸಾರ್ವಜನಿಕ ವ್ಯವಹಾರಗಳು ಅಥವಾ ಸಾರ್ವಜನಿಕ ಆಡಳಿತ ಇವುಗಳಲ್ಲಿನ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಕನಿಷ್ಠ ೧೦ ವರ್ಷಗಳ ಅನುಭವವುಳ್ಳವರಾಗಿರಬೇಕು.

4. ಜಿಲ್ಲಾ ವೇದಿಕೆಯ ಸದಸ್ಯರಾಗಿ ಆಯ್ಕೆಗೊಂಡು ನೇಮಕಾತಿಯಾದವರು ಪ್ರತಿ ತಿಂಗಳು ರೂ.೫೫೦೦-೦೦ ಗೌರವಧನ ಮತ್ತು ರೂ.೫೦೦-೦೦ಗಳ ಪ್ರಯಾಣ ಭತ್ಯೆಯನ್ನು ಪಡೆಯಲು ಅರ್ಹರಾಗಿರುತ್ತಾರೆ.
5. ಜಿಲ್ಲಾ ವೇದಿಕೆಯ ಸದಸ್ಯರಾಗಿ ನೇಮಕಾತಿ ಹೊಂದಿದವರು ನ್ಯಾಯಿಕ ಸ್ವರೂಪದ ಕೆಲಸವನ್ನು ಮಾತ್ರ ನಿರ್ವಹಿಸಬೇಕಾಗಿರುತ್ತದೆ. ಜಿಲ್ಲಾ ವೇದಿಕೆಯ ಕಾರ್ಯನಿರ್ವಹಿಸುವ ಅವಧಿಯಲ್ಲಿ ಯಾವುದೇ ರಾಜಕೀಯ ಪಕ್ಷಗಳ ಅಥವಾ ಜಿಲ್ಲಾ ವೇದಿಕೆಯ ಕಾರ್ಯನಿರ್ವಹಣೆಗೆ ದಕ್ಕೆಯಾಗುವಂತಹ ಯಾವುದೇ ಕಾರ್ಯವನ್ನು ನಿರ್ವಹಿಸುತ್ತಿರಬಾರದು.

ಗ್ರಾಹಕ ಸಂರಕ್ಷಣಾ ಕಾಯ್ದೆ ೧೯೮೬ರ ಕಲಂ ೧೦(೧ಎ)ರಡಿಯಲ್ಲಿ ಜಿಲ್ಲಾ ವೇದಿಕೆಯ ಇಬ್ಬರು ಸದಸ್ಯರ ಪೈಕಿ ಒಬ್ಬರು ಸದಸ್ಯರು ಕಡ್ಡಾಯವಾಗಿ ಮಹಿಳೆಯರಾಗಿರುತ್ತಾರೆ. ಹೀಗಾಗಿ ಮಹಿಳಾ ಅಭ್ಯರ್ಥಿಗಳು ಜಿಲ್ಲಾ ವೇದಿಕೆಯ ಸದಸ್ಯರ ಸ್ಥಾನಕ್ಕೆ ಅರ್ಜಿಯನ್ನು ಸಲ್ಲಿಸಬಹುದಾಗಿರುತ್ತದೆ.

ನ್ಯಾಯಮೂರ್ತಿ ಚಂದ್ರಶೇಖರಯ್ಯ,
ಅಧ್ಯಕ್ಷರು,
ಕರ್ನಾಟಕ ರಾಜ್ಯ ಗ್ರಾಹಕರ ಆಯೋಗ, ಬೆಂಗಳೂರು.

ಪಿ.ಆರ್. 1697

## ಶಿವಮೊಗ್ಗ ಜಿಲ್ಲಾ ಸಹಕಾರ ಸಂಘಗಳ ಉಪ-ನಿಬಂಧಕರ ನ್ಯಾಯಾಲಯ, ಶಿವಮೊಗ್ಗ.

### ದಾವ ನಂ.ಡಿಆರ್‌ಎಸ್:76:2005-06

**ಅರ್ಜಿದಾರರು:**
ಕಾರ್ಯದರ್ಶಿ,
ಅಡಿಕೆ ಪರಿಷ್ಕರಣ ಮತ್ತು ಮಾರಾಟ ಸಹಕಾರ ಸಂಘ ನಿ,
ಸಾಗರ-577 401 ಶಿವಮೊಗ್ಗ ಜಿಲ್ಲೆ.

**ಎದುರು ಅರ್ಜಿದಾರರು:**
ಶ್ರಿ ಕೆ. ಅಶೋಕ, ಬಿನ್ ಕೆ.ಎನ್. ಗೋವಿಂದಭಟ್ಟ,
ಅಡಿಕೆ ವ್ಯಾಪಾರಿಗಳು, ಜೋಗರಸ್ತೆ, ಸಾಗರ, ಶಿವಮೊಗ್ಗ ಜಿಲ್ಲೆ.

**(ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಕಲಂ 103ರ ಮೇರೆಗೆ ತೀರ್ಪು ಪೂರ್ವ ಜಪ್ತಿ ಆಜ್ಞೆ)**

**ಪ್ರಸ್ತಾವನೆ:**

ಅರ್ಜಿದಾರರ ಸಂಘವು ಈ ನ್ಯಾಯಾಲಯದಲ್ಲಿ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 70ರ ಅಡಿಯಲ್ಲಿ ಎದುರು ಅರ್ಜಿದಾರರ ವಿರುದ್ಧ ರೂ.19,48,918-00 (ರೂ. ಹತ್ತೊಂಬತ್ತು ಲಕ್ಷಗಳ ನಲವತ್ತೆಂಟು ಸಾವಿರದ ಒಂಬೈನೂರ ಹದಿನೆಂಟು ಮಾತ್ರ)ಗಳ ವಸೂಲಿಗಾಗಿ ದಾವಾ ನಂ.ಡಿಆರ್‌ಎಸ್:76:05-06ರ ಪ್ರಕಾರ ದಾವ ದಾಖಲ್ಮಾಡಿರುತ್ತಾರೆ.

ಎದುರು ಅರ್ಜಿದಾರರು ಈ ನ್ಯಾಯಾಲಯವು ನೀಡಬಹುದಾದ ಡಿಕ್ರಿ ಆದೇಶವನ್ನು ನಿರರ್ಥಕಗೊಳಿಸುವ ಉದ್ದೇಶದಿಂದ ತಮಗೆ ಸೇರಿದ ಸ್ವತ್ತುಗಳನ್ನು ಬೇರೆಯವರಿಗೆ ಪರಭಾರೆ ಮತ್ತು ಮಾರಾಟ ಮಾಡಲು ಪ್ರಯತ್ನ ಪಡುತ್ತಿದ್ದಾರೆ ಎಂದು ತಿಳಿದುಬಂದಿರುತ್ತದೆಂದು ಮತ್ತು ಬೇರೆಯವರಿಗೆ ಪರಭಾರೆ ಅಥವಾ ಮಾರಾಟ ಮಾಡುವ ಪ್ರತಿವಾದಿಯ ಉದ್ದೇಶವನ್ನು ಪ್ರತಿಬಂಧಿಸಲು ತೀರ್ಪುಪೂರ್ವ ಜಪ್ತಿ ಆದೇಶ ಹೊರಡಿಸುವಂತೆ ಕೋರಿ ಅರ್ಜಿದಾರರ ಸಂಘದ ಆಡಳಿತ ಮಂಳಿಯು ದಿನಾಂಕ: 3.8.2005 ರಂದು ಸಭೆಯಲ್ಲಿ ತೀರ್ಮಾನಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 13ರ ಪ್ರಕಾರ ದಿನಾಂಕ: 9.9.2005 ರಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಅರ್ಜಿದಾರರು ಕಲಂ 103ರ ಪ್ರಕಾರ ಕೋರಿರುವ ಕೋರಿಕೆಯು ಯುಕ್ತವಾಗಿದೆಯೆಂದು ಸ್ವತಃ ಈ ನ್ಯಾಯಾಲಯಕ್ಕೆ ಮನವರಿಕೆಯಾಗಿದೆ. ಆದ್ದರಿಂದ ಈ ಕೆಳಕಂಡ ಷರತ್ತು ಪೂರ್ವ ಜಪ್ತಿ ಆಜ್ಞೆಯ ನೋಟೀಸನ್ನು ಹೊರಡಿಸಲಾಗಿದೆ.

**ಆದೇಶ**

**ಕ್ರ:ಸಂ:ಸಸಉನಿತಿ:ದಾವಾ:ಕಲಂ 103:06-07/2076, ದಿನಾಂಕ: 17ನೇ ನವೆಂಬರ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭಗಳ ಹಿನ್ನೆಲೆಯಲ್ಲಿ ಕೆ. ಈಶ್ವರಸ್ವಾಮಿ, ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ, ಆದ ನಾನು, ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 103 ರನ್ವಯ ದತ್ತವಾದ ಅಧಿಕಾರವನ್ನು ಉಪಯೋಗಿಸಿ ಈ ಆದೇಶದೊಂದಿಗೆ ಇರುವ ಅನುಸೂಚಿ (ಷೆಡ್ಯೂಲ್)ಯಲ್ಲಿ ಕಾಣಸಿರುವ ಸ್ಥಿರಾಸ್ತಿಗಳನ್ನು ದಾವ ಅರ್ಜಿಯ ತೀರ್ಪು ಪೂರ್ವದಲ್ಲಿ ಷರತ್ತು ಪೂರ್ವಕ ಜಪ್ತಿಗೊಳಿಲಾಗಿದೆಯೆಂದು ಆದೇಶಿಸಿದೆ.

ಅಲ್ಲದೇ ಎದುರು ಅರ್ಜಿದಾರರು ತಮ್ಮ ಸ್ಥಿರಾಸ್ತಿಯನ್ನು ಷರತ್ತು ಪೂರ್ವ ಜಪ್ತಿ ಆಜ್ಞೆಯ ವ್ಯಾಪ್ತಿಯಿಂದ ಹೊರತರಲು ಇಚ್ಛಿಸಿದಲ್ಲಿ, ಜಪ್ತಿಗೊಳಿಸಲ್ಪಟ್ಟ ಆಸ್ತಿಯ ಮೌಲ್ಯಕ್ಕೆ ಮತ್ತು ನ್ಯಾಯಾಲಯ ಸರಿಯೆಂದು ಭಾವಿಸುವ ನಗದು ಭದ್ರತೆ (ಸೆಕ್ಯೂರಿಟಿ) ಯನ್ನು ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಇವರ ಹೆಸರಿನಲ್ಲಿ ಶಿವಮೊಗ್ಗ ಜಿಲ್ಲಾ ಸಹಕಾರ ಕೇಂದ್ರ ಬ್ಯಾಂಕ್ (ನಿ) ಶಿವಮೊಗ್ಗ, ಇಲ್ಲಿ ಅಮಾನತ್ ಖಾತೆಯಲ್ಲಿ ತೊಡಗಿಸಿ, ಈ ಬಗ್ಗೆ ರಶೀದಿ ಅಥವಾ ಬ್ಯಾಂಕಿನ ಚಲನ್ ಪ್ರತಿಯನ್ನು ದಿನಾಂಕ: 2.2.2006ರ ಒಳಗೆ ಕೆಳಸಹಿದಾರರಿಗೆ ಹಾಜರುಪಡಿಸುವ ಮೂಲಕ ಜಪ್ತಿ ಆಜ್ಞೆಯಿಂದ ಹೊರಗುಳಿಯಬಹುದೆಂದು ಸಹ ಸಂಬಂಧಿಸಿದವರಿಗೆ ಈ ನೋಟೀಸ್ ನೀಡಲಾಗಿದೆ. ಭದ್ರತೆಯನ್ನು ಒದಗಿಸುವ ಮತ್ತು ಷರತ್ತು ಪೂರೈಸುವುದಕ್ಕೆ ವಿಫಲರಾದಲ್ಲಿ ಈ ಷರತ್ತು ಪೂರ್ವಕ ಜಪ್ತಿ ಆಜ್ಞೆಯನ್ನು ಸ್ಥಿರೀಕರಿಸಲಾಗುವುದೆಂದು ತಿಳಿಯತಕ್ಕದ್ದು.

ಈ ಆದೇಶಕ್ಕೆ ಅನುಸೂಚಿಯಲ್ಲಿರುವ ಸ್ಥಿರ ಸ್ವತ್ತುಗಳನ್ನು ಪಡೆಯುವ ಅಥವಾ ಖರೀದಿಸುವ ವ್ಯಕ್ತಿ ಅಥವಾ ಸಂಸ್ಥೆಗಳು ಸಹ ಷರತ್ತು ಪೂರ್ವಕ ಜಪ್ತಿ ಆಜ್ಞೆಗೆ ಒಳಪಡುವರು ಎಂದು ಸಹ ಆದೇಶಿಸಿದೆ.

**ಷರತ್ತು ಪೂರ್ವ ಜಪ್ತಿ ಆದೇಶಕ್ಕೆ ಒಳಗಾದ ಸ್ವತ್ತುಗಳ ಅನುಸೂಚಿ**

**(ಷೆಡ್ಯೂಲ್)**

| ಕ್ರ. ಸಂ. | ಖಾತೆದಾರರ ಹೆಸರು | ಸ್ಥಿರಾಸ್ತಿ ಇರುವ ಸ್ಥಳ | ಖಾತೆ:ಸರ್ವೆ ನಂ. | ವಿಸ್ತೀರ್ಣ ಎಕರೆ ಗುಂಟೆ | ತರಹೆ |
|---|---|---|---|---|---|
| 1 | ಶ್ರೀ ಕೆ. ಅಶೋಕ ಬಿನ್ ಕೆ.ಎನ್. ಗೋವಿಂದಭಟ್ಟ ಸಾಗರ. | ದೊಂಬೆಗ್ರಾಮ ತಾಳಗುಪ್ಪ ಹೋಬಳಿ ಸಾಗರ ತಾಲ್ಲೂಕ್. | ಸರ್ವೆ ನಂ. 33<br>ಸರ್ವೆ ನಂ. 33 | 4 - 15<br>0 - 12 | ಬಾಗಾಯ್ತು<br>ಖುಷ್ಕಿ |

(ಅರ್ಜಿದಾರರು ಈ ನ್ಯಾಯಾಲಯಕ್ಕೆ ಒದಗಿಸಿದ ದಿನಾಂಕ: 2.8.2005 ರವರೆಗಿನ ಆಸ್ತಿಯ ಮೇಲಿನ ಋಣಭಾರಗಳ ಪ್ರಮಾಣ ಪತ್ರ (ಇ.ಸಿ.) ಪ್ರಕಾರ)

ಈ ಆದೇಶವನ್ನು ನ್ಯಾಯಾಲಯದ ಮೊಹರು ಮತ್ತು ಸ್ವಸಹಿಯೊಂದಿಗೆ ದಿನಾಂಕ: 8ನೇ ನವೆಂಬರ್ 2006 ರಂದು ನೀಡಿದೆ.

**ಕೆ. ಈಶ್ವರಸ್ವಾಮಿ**

ಪಿ.ಆರ್. 1677

ಸಹಕಾರ ಸಂಘಗಳ ಉಪ-ನಿಬಂಧಕರು, ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬೆಂಗಳೂರು ವಿಭಾಗ-4, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 560 029

**ಪ್ರಕರಣ ಸಂಖ್ಯೆ: ಸಕಾಅಬೆಂ4/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-40/2006-07, ದಿನಾಂಕ: 22ನೇ ನವೆಂಬರ್ 2006**

**ಅರ್ಜಿದಾರರು:**

1. ಶ್ರೀ ಗಂಗಪ್ಪ S/o ಲೇಟ್ ನರಸಪ್ಪ
ಶ್ರೀಮತಿ ತಿರುಮಲಕ್ಕ W/o ಗಂಗಪ್ಪ, ನಂ.23,
2ನೇ ಕ್ರಾಸ್, ಭಾಂಗಿಯಪ್ಪ ಗಾರ್ಡನ್, ಶಾಂತಿನಗರ,
ಬೆಂಳೂರು-560 027

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀಮತಿ ಡಿ.ಎಲ್. ಶೋಬ ಕೋಂ
ವೇಣುಗೋಪಾಲರೆಡ್ಡಿ, ನಂ.33, 7ನೇ ಮೈನ್ ರಸ್ತೆ,
ಎ.ಜಿ.ಎಸ್. ಲೇಔಟ್, ಆನಂದನಗರ, ಬೆಂಗಳೂರು-24.
2. ದಿ ಓರಿಯಂಟಲ್ ಇನ್ಸೂರೆನ್ಸ್ ಕಂ. ಲಿ., ನಂ.12, ನೆಕ್ಸ್ಟ್
ಕೆನರಾ ಬ್ಯಾಂಕ್, ಬಳ್ಳಾರಿ ರಸ್ತೆ, ಹೆಬ್ಬಾಳ್,
ಬೆಂಗಳೂರು-24.

### ಪ್ರಕಟಣೆ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿವಂಗತ ಶ್ರೀ ನರಸಪ್ಪ ರವರು ಅರ್ಜಿದಾರರಲ್ಲಿ ಕಾರ್ಮಿಕನಾಗಿ ಕೆಲಸದ ಮೇಲೆ ಇದ್ದಾಗ, ದಿನಾಂಕ: 26.7.04 ರಂದು ಅಪಘಾತ ಸಂಭವಿಸಿ, ನಂತರ ಮೃತರಾಗಿರುತ್ತಾರೆ.

ಮೃತರು ಅರ್ಜಿದಾರರ ಕಡೆ ಕೆಲಸದಲ್ಲಿರುವ ಕಾರಣ, ಪ್ರತಿವಾದಿಗಳಿಗೆ ಅರ್ಜಿದಾರರು ಪರಿಹಾರ ಹಣ ನೀಡುವ ಬಗ್ಗೆ ದಿನಾಂಕ: 4.8.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜೆ.ಎಂ. ಜಯದೇವಯ್ಯ**

ಪಿ.ಆರ್. 1678

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಸಹಾಯಕ ಕಾರ್ಮಿಕ ಆಯುಕ್ತರು, ಬೆಂಗಳೂರು ವಿಭಾಗ-4, ಬೆಂಗಳೂರು.

## ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಬೆಂಗಳೂರು ವಿಭಾಗ-4, ಕಾರ್ಮಿಕ ಭವನ, ಬನ್ನೇರುಘಟ್ಟ ರಸ್ತೆ, ಬೆಂಗಳೂರು - 560 029

**ಪ್ರಕರಣ ಸಂಖ್ಯೆ: ಸಕಾಅಬೆಂ4/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-95/2006-07, ದಿನಾಂಕ: 22ನೇ ನವೆಂಬರ್ 2006**

**ಅರ್ಜಿದಾರರು:**

ಯುನೈಟೆಕ್ ಲಿ. ಬಿ.ಎಂ.ಟಿ.ಸಿ. ಪ್ರಾಜೆಕ್ಟ್ ನಂ.53
IDBL ಲೇಔಟ್, ಗೊಟಗೇರಿ, ಬನ್ನೇರುಘಟ್ಟ
ರೋಡ್, ಬೆಂಗಳೂರು.

**ವಿರುದ್ಧ**

**ಪ್ರತಿವಾದಿಗಳು:**

1. ಶ್ರೀ ಜಗನಾರಾಯಣ್ಣಯಾದವ್
ನಂ. 82, ವಿಲೇಜ್ ಶಂಕರಪುರ, ಪೋಸ್ಟ್, ಗಜಪತಿ,
ಸಮಸ್ತಿಪುರ ಜಿಲ್ಲೆ, ಬಿಹಾರ.
2. ದಿ ನ್ಯೂ ಇಂಡಿಯಾ ಅಸೂರೆನ್ಸ್ ಕಂಪನಿ ಲಿಮಿಟೆಡ್,
ನಂ.2/2A, ಯೂನಿವರಸೆಲ್ ಇನ್‌ಶ್ಯೂರೆನ್ಸ್, ಬಿಲ್ಡಿಂಗ್,
3ನೇ ಮಹಡಿ, ಅಸಫ್ ಅಲಿ ರೋಡ್ ನ್ಯೂ ಡೆಲ್ಲಿ-110 002

### ಪ್ರಕಟಣೆ

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ದಿವಂಗತ ಶ್ರೀ ಕಾಮ್‌ದೇವ್‌ಯಾದವ್ ರವರು ಅರ್ಜಿದಾರರಲ್ಲಿ ಕಾರ್ಮಿಕನಾಗಿ ಕೆಲಸದ ಮೇಲೆ ಇದ್ದಾಗ, ದಿನಾಂಕ: 30.10.05 ರಂದು ಅಪಘಾತ ಸಂಭವಿಸಿ, ನಂತರ ಮೃತರಾಗಿರುತ್ತಾರೆ.

ಮೃತರು ಅರ್ಜಿದಾರರ ಕಡೆ ಕೆಲಸದಲ್ಲಿರುವ ಕಾರಣ, ಪ್ರತಿವಾದಿಗಳಿಗೆ ಅರ್ಜಿದಾರರು ಪರಿಹಾರ ಹಣ ನೀಡುವ ಬಗ್ಗೆ ದಿನಾಂಕ: 31.10.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಆದುದರಿಂದ, ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಿದ್ದರೆ ಅಥವಾ ತಾವೇನಾದರೂ ಮೃತರ ನಿಜವಾದ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆಯು ಕರ್ನಾಟಕ ರಾಜ್ಯಪತ್ರಲ್ಲಿ ಪ್ರಕಟವಾದ 30 ದಿವಸಗಳ ಒಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನಾಗಲಿ ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲಿ ಅಥವಾ ಅರ್ಜಿಗಳಾಗಲಿ ಯಾರಿಂದಲೂ ಬಾರದೇ ಇದ್ದರೆ, ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ತೆಗೆದುಕೊಳ್ಳಲಾಗುವುದು. ತದನಂತರ ಬಂದ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ.

**ಜೆ.ಎಂ. ಜಯದೇವಯ್ಯ**

ಪಿ.ಆರ್. 1679

ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ಹಾಗೂ ಸಹಾಯಕ ಕಾರ್ಮಿಕ ಆಯುಕ್ತರು, ಬೆಂಗಳೂರು ವಿಭಾಗ-4, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಬೆಂಗಳೂರು ವಿಭಾಗ-1, ಬೆಂಗಳೂರು**

**ಸಂಖ್ಯೆ: ಸಕಾಅಬೆಂ-1/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-41/2006, ದಿನಾಂಕ: 13ನೇ ಸೆಪ್ಟೆಂಬರ್ 2006**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| Mr. S.L. Radhakrishna<br>S/o Late Linge Gowda<br>& Others, Mandya District. | V/s | 1) The Oriental Insurance Co. Ltd., Bangalore.<br>2) Sri Pruthviraj P Jain<br>Kadirenahalli, Bangalore. |

**ಪ್ರಕಟಣೆ ದಿನಾಂಕ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 24.8.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಲೇಟ್ ಧನಂಜಯ ಕುಮಾರ್, ಅವರು ಮೇಲೆ ವಿಳಾಸಿಸಿರುವ 2ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಹೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ
ಪಿ.ಆರ್. 1600 ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-1, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಬೆಂಗಳೂರು ವಿಭಾಗ-1, ಬೆಂಗಳೂರು**

**ಸಂಖ್ಯೆ: ಸಕಾಅಬೆಂ-1/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-42/2006, ದಿನಾಂಕ: 13ನೇ ಸೆಪ್ಟೆಂಬರ್ 2006**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| Smt. Lakshmi D/o Late Anthony<br>Bangalore | V/s | 1) Mr. Khaleem Pasha, Bangalore.<br>2) The United India Insurance Co. Ltd.,<br>Bangalore. |

**ಪ್ರಕಟಣೆ ದಿನಾಂಕ**

ಈ ಮೇಲೆ ವಿಳಾಸಿಸಿರುವ ಅರ್ಜಿದಾರರು ದಿನಾಂಕ: 5.9.06 ರಂದು ಈ ನ್ಯಾಯಾಲಯಕ್ಕೆ ಅರ್ಜಿಯೊಂದನ್ನು ಸಲ್ಲಿಸಿ ಶ್ರೀ ಲೇಟ್ ಅಂತೋಣಿ, ಬೆಂಗಳೂರು ಅವರು ಮೇಲೆ ವಿಳಾಸಿಸಿರುವ 1ನೇ ಪ್ರತಿವಾದಿ ಸಂಸ್ಥೆಯಲ್ಲಿ ಕೆಲಸ ನಿರ್ವಹಿಸುತ್ತಿದ್ದಾಗ ಉದ್ಯೋಗ ಸಮಯದಲ್ಲಿ ಅಪಘಾತ ಸಂಭವಿಸಿ, ಮರಣ ಹೊಂದಿರುತ್ತಾರೆಂದು ತಿಳಿಸಿ, ಮೇಲೆ ವಿಳಾಸಿಸಿರುವ 1 ಮತ್ತು 2ನೇ ಪ್ರತಿವಾದಿಗಳ ವಿರುದ್ಧ ಕ್ರಮ ತೆಗೆದುಕೊಂಡು ಕಾಯ್ದೆಯನ್ವಯ ಪರಿಹಾರ ಹಾಗೂ ಇತರೆ ಉಪಶಮನಗಳನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯವನ್ನು ಪ್ರಾರ್ಥಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಸಂಬಂಧಪಟ್ಟವರಿಗೆ ಈ ಪ್ರಕಟಣೆ ಮೂಲಕ ತಿಳಿಸುವುದೇನೆಂದರೆ, ಈ ಬಗ್ಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದರೆ ಹಾಗೂ ಅರ್ಜಿದಾರರಲ್ಲದೆ ತಾವೇನಾದರೂ ಮೃತರ ನಿಜವಾದ "ಅವಲಂಬಿತರು" ಎಂದು ಹೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳೊಳಗಾಗಿ ತಮ್ಮ ಆಕ್ಷೇಪಣೆ ಅಥವಾ ಅರ್ಜಿಗಳನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಬೇಕು. ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೈಮ್ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು.

ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ
ಪಿ.ಆರ್. 1601 ಪರಿಹಾರ ಆಯುಕ್ತರು, ಬೆಂಗಳೂರು ವಿಭಾಗ-1, ಬೆಂಗಳೂರು.

**ಸಹಾಯಕ ಕಾರ್ಮಿಕ ಆಯುಕ್ತರು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಬೆಂಗಳೂರು ವಿಭಾಗ-1, ಬೆಂಗಳೂರು**

**ಸಂಖ್ಯೆ: ಸಕಾಅಬೆಂ-1/ಡಬ್ಲ್ಯೂಸಿಎ/ಎಫ್‌ಸಿ/ಸಿಆರ್-43/2006, ದಿನಾಂಕ: 13ನೇ ಸೆಪ್ಟೆಂಬರ್ 2006**

| ಅರ್ಜಿದಾರರು: | | ಪ್ರತಿವಾದಿಗಳು: |
|---|---|---|
| Smt. Shabeen Taj W/o Late Syed<br>Shafi @ Shafiulla & Others<br>Bangalore | V/s | 1) Smt. Fahmida W/o Abdul Basheer,<br>T.N.Pura Taluk, Mysore.<br>2) The Oriental Insurance Co. Ltd., Bangalore. |

